

# ಕರ್ನಾಟಕ ವಿಧಾನ ಪರಿಷತ್ತು

## ನೂರ ನಲವತ್ತ ಮೂರನೆಯ ಅಧಿವೇಶನದ ಮುಂದುವರೆದ ಉಪವೇಶನ

## ಚುಕ್ಕೆ ರಹಿತ ಪ್ರಶ್ನೆ

ದಿನಾಂಕ : 22-03-2021 ಪ್ರಶ್ನೆ ಸಂಖ್ಯೆ : 1548 (1883)

ಸದಸ್ಯರ ಹೆಸರು ಮತ್ತು ಕ್ಷೇತ್ರ : ಶ್ರೀ ಮರಿತಿಬ್ಬೇಗೌಡ (ಶಿಕ್ಷಕರ ಕ್ಷೇತ್ರ)

ಉತ್ತರ ನೀಡಬೇಕಾದ ದಿನಾಂಕ : 22-03-2021

ಉತ್ತರಿಸುವ ಸಚಿವರು : ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಹಾಗೂ ಸಕಾಲ ಸಚಿವರು

ವಿಷಯ : ಉಪನ್ಯಾಸಕರ ಜೇಷ್ಠತಾ ಪಟ್ಟಿ ತಯಾರಿಕೆಯಲ್ಲಿ ವ್ಯತ್ಯಾಸವಾಗಿರುವ ಬಗ್ಗೆ

(ಅ) ಸರ್ಕಾರಿ ಪದವಿಪೂರ್ವ ಕಾಲೇಜುಗಳ ಉಪನ್ಯಾಸಕರ ವೃಂದ ಮತ್ತು ನೇಮಕಾತಿ ನಿಯಮಾವಳಿಗಳು, 1983, 1998 ಮತ್ತು 2008ರ ನಿಯಮಾವಳಿಗಳ ಪ್ರಕಾರ ಒಟ್ಟು ಖಾಲಿ ಹುದ್ದೆಗಳಲ್ಲಿ ಬ್ಲಾಕ್‌ವಾರು, ವಿಷಯವಾರು ಶೇಕಡ 50%ರಷ್ಟು ನೇರ ನೇಮಕಾತಿ ಮತ್ತು ಶೇಕಡ 50%ರಷ್ಟು ಸ್ನಾತಕೋತ್ತರ ಪದವಿ ಪಡೆದ ಪ್ರೌಢಶಾಲಾ ಸಹ ಶಿಕ್ಷಕರಿಂದ ಬಡ್ತಿ ಮೂಲಕ ನೇಮಕಾತಿ ಮಾಡುವಾಗ ಕೋಟಾ ರೂಲ್ಸ್ ಪಾಲಿಸಲಾಗಿದೆಯೇ; (ವಿವರಗಳನ್ನು ಒದಗಿಸುವುದು)

(ಆ) ಉಪನ್ಯಾಸಕರ ಜೇಷ್ಠತಾ ಪಟ್ಟಿ ತಯಾರಿಕೆಯಲ್ಲಿ ಸರ್ಕಾರದ ಆದೇಶಗಳನ್ನು ಪಾಲಿಸದೆ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ;

(ಇ) ಪದವಿಪೂರ್ವ ಶಿಕ್ಷಣ ಇಲಾಖೆಯು ಪ್ರಕಟಿಸಿರುವ ಜೇಷ್ಠತಾ ಪಟ್ಟಿಯಲ್ಲಿರುವ ಬಡ್ತಿ ಮತ್ತು ನೇರ ನೇಮಕಾತಿ ಹುದ್ದೆಗಳಲ್ಲಿ ವ್ಯತ್ಯಾಸವಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ ;

(ಈ) ಹಾಗಾದರೆ ಸದರಿ ನ್ಯೂನತೆಗಳನ್ನು ಸರಿಪಡಿಸಿ, ಯಾವ ಕಾಲಮಿತಿಯಲ್ಲಿ ಪ್ರಾಂಶುಪಾಲರ ಹುದ್ದೆಗೆ ಬಡ್ತಿ ನೀಡಲಾಗುವುದು?